# ಹೊಸಗುಂದದ ನಾಡು – ಒಂದು ಅಧ್ಯಯನ

**ಕೆ. ಜಗನ್ನಾಥ ಶಾಸ್ತ್ರಿ**

ಹೊಸಗುಂದ, ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಒಂದು ಹಳ್ಳಿ. ಅಲ್ಲಿ ಈಗ ಒಂದು ಈಶ್ವರ ದೇವಾಲಯ ಮತ್ತು ಕಂಚಿ ಕಾಳಮ್ಮ ಎಂದು ಕರೆಯ ಲಾಗುವ ದೇವಾಲಯಗಳಿವೆ.

ಸಾಂತಾರ ವಂಶದ ಅರಸರು ಪೊಟ್ಟೆ ಪೊಂಬುರ್ಚ ವನ್ನು (ಈಗಿನ ಹುಂಚ) ರಾಜಧಾನಿಯನ್ನಾಗಿ ಮಾಡಿ ಕೊಂಡು ಕ್ರಿ.ಶ. ಏಳನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ ರಾಜ್ಯವಾಳಿದರು. ಹನ್ನೆರಡನೆಯ ಶತಮಾನದಲ್ಲಿ ಸಾಂತಾರ ದೊರೆ, ದೋರ ಸಮುದ್ರದ ಹೊಯ್ಸಳರಿಗೆ ಸೋತನು. ಆಗ ಅವರು ಎರಡು ಗುಂಪು ಗಳಾಗಿ ವಿಭಾಗವಾದರು. ಒಂದು ಶಾಖೆ ಕಳಸ ದಿಂದಲೂ ಮತ್ತೊಂದು ಶಾಖೆ ಹೊಸಗುಂಡದಿಂದಲೂ ಆಳಿದರು.[1]

ಕಳಸದ ಸಾಂತಾರರು ಜೈನರು, ಹೊಸಗುಂದದ ಅರಸರು ಶೈವರು. ಕಳಸದಿಂದ ಆಳಿದ ಸಾಂತಾರರು, ತಾವು "ಶ್ರೀ ಪದ್ಮಾವತೀ ವರಪ್ರಸಾದಾಸುಗ್ರಹರು" ಎಂದು ಕರೆದುಕೊಂಡಿದ್ದಾರೆ. ಹೊಸಗುಂದದ ಅರಸರು, ತಾವು ಪೊಟ್ಟೆ ಪೊಂಬುರ್ಚದ ಪುರವರಾಧೀಶ್ವರರೆಂದೂ, ಸಾಂತಳಿಗೆ ನಾಡಿನ ಒಡೆಯರೆಂದೂ ಕರೆದುಕೊಂಡು, ಭಿಲ್ಲೇಶ್ವರದೇವರ ದಿವ್ಯ ಪಾದಪದ್ಮಾರಾಧಕರೆಂದೂ ಕರೆದುಕೊಂಡಿದ್ದಾರೆ.

ನಾನು ಸಂಗ್ರಹಿಸಿರುವ "ಭಿಲ್ಲೇಶ್ವರ ಮಹಾತ್ಮೆ" ಎಂಬ ಪದ್ಯಗಳಲ್ಲಿ, ಈ ಪ್ರದೇಶವನ್ನು ಕನಕನಾಯಕ ಎಂಬುವನು ಆಳುತ್ತಿದ್ದನೆಂದೂ, ರಾಜಧಾನಿ ಕನಕಪುರ ಎಂದೂ ಹೇಳಲಾಗಿದೆ. ಈ ಕನಕನಾಯಕನು ಭಿಲ್ಲೇಶ್ವರ ದೇವರ ಭಕ್ತನೆಂದೂ ವರ್ಣಿಸಲಾಗಿದೆ. ಪದ್ಮಾವತಿ ಮಹಾತ್ಮೇ—ಎಂಬ ಪದ್ಯ ಕಾವ್ಯದಲ್ಲಿ ಜಿನದತ್ತ ರಾಯ ನಿಗೆ, ಒಬ್ಬ ಬೇಡರ ನಾಯಕನು ಈ ಪ್ರದೇಶವನ್ನು ಅರ್ಪಿಸಿದನೆಂದೂ, ಪದ್ಮಾವತಿ ದೇವಿಯ ಅಪ್ಪಣೆಯ ಮೇರೆಗೆ ಜಿನದತ್ತರಾಯನು ಕನಕಪುರದಲ್ಲಿ ಪದ್ಮಾವತಿ ದೇವಿಗಾಗಿ ಒಂದು ದೇವಾಲಯವನ್ನು ಕಟ್ಟಿದನೆಂದೂ, ಪೊಂಬುರ್ಚ ಎಂಬ ರಾಜಧಾನಿಯನ್ನು ಸ್ಥಾಪಿಸಿ, ರಾಜ್ಯ ವಾಳಿದನೆಂದೂ ಹೇಳಿದೆ.

ಈ ಎರಡು ಆಧಾರಗಳಿಂದ ಹೀಗೆ ಹೇಳಬಹುದು, ಜಿನದತ್ತ ರಾಯನಿಗೆ ಕನಕನಾಯಕ ರಾಜ್ಯವನ್ನು ವಹಿಸಿದನಂತರ, ತನ್ನ ಪರಿವಾರದೊಂದಿಗೆ ಅವನು, ಆ ಪ್ರದೇಶದಿಂದ ಹೊರಟು, ಹೊಸಗುಂದಕ್ಕೆ ಬಂದು ನೆಲೆಸಿ ದನು. ಕನಕಪುರ–ಎಂಬ ಹೆಸರು ಇಲ್ಲವಾಗಿ, ಆ ಸ್ಥಳ ದಲ್ಲಿ ಪೊಂಬುರ್ಚ ಎಂಬ ಪಟ್ಟಣ ಕಟ್ಟಲ್ಪಟ್ಟಿತು. ಭಿಲ್ಲೇಶ್ವರ ದೇವಾಲಯವಿದ್ದ ಪ್ರದೇಶದಲ್ಲಿ ಮತ್ತೊಂದು ಊರಿನ ರಚನೆಯಾಯಿತು. ಈ ಹೊಸ ಊರು, ಭಿಲ್ಲೇಶ್ವರ–ಎಂದೇ ಕರೆಯಲ್ಪಟ್ಟಿತು.

ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ.

---

1 ಎ.ಕ. VII, ಸೊರಬ ೧೯

ಶಾಸನಗಳನ್ನು ಅಧ್ಯಯನ ಮಾಡಿದಾಗ ಹೊಸಗುಂದದ ರಾಜಧಾನಿಯಿಂದ ಆಳಿದ ಕೆಲವು ಅರಸರ ವಿಚಾರಗಳು ತಿಳಿದು ಬರುತ್ತವೆ. ಅವುಗಳನ್ನು ಪರಿಚಯ ಮಾಡಿಕೊಡುವುದೇ ಈ ಪ್ರಬಂಧದ ಉದ್ದೇಶ.

೧. **ಬೊಮ್ಮರಸ** : ಹೊಸಗುಂದ ನಾಡಿನ ಇತಿಹಾಸವನ್ನು ಅಧ್ಯಯನ ಮಾಡಿದಾಗ ನಮಗೆ ಸಿಗುವ ಮೊದಲ ಅರಸ, ಬೊಮ್ಮರಸ. ಇವನನ್ನು ಶಾಸನಗಳಲ್ಲಿ "ಮಹಾಮಂಡಲೇಶ್ವರ"ನೆಂದೂ, "ಕೊಂಕಣೆಗರಾಯ ಬೇಂಟೆಕಾರ"ನೆಂದೂ, "ತುಳುರಾಯ ಸ್ಥಾಪನಾಚಾರ್ಯ"ನೆಂದೂ "ಮಾಂಡಳಿಕಗಣ ಗಂಡುಗಲಿ" ಎಂದೂ "ಕಾದಂಬರಾಯ ದಿಶಾಪಟ್ಟ"ನೆಂದೂ "ಸಿಂಧುಕುಲ ನಿರ್ಮೂಲ"ನೆಂದೂ "ಸಾಂತಳಿಗೆ ಸಾಸಿರ ನಾಡಿನ ಒಡೆಯ"ನೆಂದೂ ಹೇಳಿದೆ.

ಕ್ರಿ.ಶ. ೧೧೫೦ ಶಾಸನದಲ್ಲಿ ಬೊಮ್ಮರಸನ ತಂದೆ ಚೇರಭೂಪನೆಂದೂ, ತಾಯಿ ಹೊನ್ನಲದೇವಿ ಎಂದು ಹೇಳಿದೆ. ಇವನ ಹೆಂಡತಿ ಲಚ್ಚಿಯಬ್ಬೆ. ಇವರಿಗೆ ಇಬ್ಬರು ಗಂಡು ಮಕ್ಕಳು. ಒಬ್ಬನ ಹೆಸರು ಕಾಳರಸ ಮತ್ತೊಬ್ಬನ ಹೆಸರು ಬಾಳೆಯಮ್ಮವೆಗ್ಗಡೆ (ಇವನಿಗೆ ತಮ್ಮರಸನೆಂಬ ಹೆಸರೂ ಇತ್ತು). ಬೊಮ್ಮರಸನ ಮಗಳ ಹೆಸರು ಕೆಳೆಯಬ್ಬರಸಿ ಇವಳ ಮಗಳ ಹೆಸರು ಬೀಯಬ್ಬರಸಿ. ಬೀಯಬ್ಬರಸಿಯ ಗಂಡ ಪಡವಳಗೊಂಗಣ. ಬೊಮ್ಮರಸ ಹೊಸಗುಂದದ ನಾಡಿನೊಂದಿಗೆ ಕುಂದ ನಾಡಿಗೂ, ಕೊಡ ನಾಡಿಗೂ ಅರಸನಾಗಿದ್ದನೆಂದು ಇದೇ ಶಾಸನ ಹೇಳುತ್ತದೆ. ಕ್ರಿ.ಶ. ೧೧೦೩ರ ಶಾಸನ ಬೊಮ್ಮರಸನ ಮಂತ್ರಿ, ಕೋಟಿ ನಾಯಕ ಎಂಬುದನ್ನು ತಿಳಿಸುತ್ತದೆ.[2] ಕೋಡೂರು ದುರ್ಗದ ಮಂಡಲೇಶ್ವರನಾದ ಅಣ್ಣಮದೇವ ಹೆಗ್ಗಡೆ ಬೊಮ್ಮರಸನ ಶತ್ರು. ಬೊಮ್ಮರಸನು ಇವನ ಮೇಲೆ ಯುದ್ಧ ಮಾಡಿ ಕೋಡೂರು ದುರ್ಗವನ್ನು ವಶಮಾಡಿಕೊಂಡನೆಂದು ಕ್ರಿ.ಶ. ೧೨೧೯ರ ಶಾಸನ ಹೇಳುತ್ತದೆ.[3] ಕೆಲವು ಕಾಲ ಬೊಮ್ಮರಸನು ಪೊಂಬುರ್ಚ ನಾಡಿಗೂ ಅರಸನಾಗಿದ್ದನೆಂದು ಕ್ರಿ.ಶ. ೧೨೪೮ರ ಶಾಸನ ಹೇಳುತ್ತದೆ. ಇದೇ ಸಮಯದಲ್ಲಿ ಕಲಿಸೆ ನಾಡನ್ನು ಬೀರದೇವರಸ ಎಂಬುವವನು ಆಳುತ್ತಿದ್ದನು. ಇವನು ಬೊಮ್ಮರಸನ ಮೇಲೆ ದಂಡೆತ್ತಿ ಬಂದು, ಪೊಂಬುರ್ಚವನ್ನು ಕೊಳ್ಳೆ ಹೊಡೆದನೆಂದು ಇದೇ ಶಾಸನ ವರ್ಣಿಸುತ್ತದೆ.[4] ಇದಾದ ಮೇಲೆ ಬೊಮ್ಮರಸ ಮತ್ತೆ ಹೊಸಗುಂದಕ್ಕೆ ಬಂದು ಆಡಳಿತವನ್ನು ಮುಂದುವರಿಸಿರಬಹುದು. ದೋರಸಮುದ್ರದ ಮುಮ್ಮಡಿ ನರಸಿಂಹ, ಬೊಮ್ಮರಸನ ಮತ್ತೊಬ್ಬ ಶತ್ರು. ಮುಮ್ಮಡಿ ನರಸಿಂಹನ ಕಡೆಯುವರು ಹೊಸಗುಂದದ ಗಡಿ ಪ್ರದೇಶದವರನ್ನು ಹಿಂಸಿಸುತ್ತಿದ್ದುದನ್ನು ಕ್ರಿ.ಶ. ೧೨೬೩ರ ಶಾಸನ ವಿವರಿಸುತ್ತದೆ.[5] ಬೊಮ್ಮರಸ ಈ ಮುಮ್ಮಡಿ ನರಸಿಂಹನ ಮೇಲೆ ಯುದ್ಧ ಮಾಡಿ, ಅವನನ್ನು ಸೋಲಿಸಿದ ವಿಷಯವು ಕ್ರಿ.ಶ. ೧೨೭೬ರ ಶಾಸನದಿಂದ ತಿಳಿದು ಬರುತ್ತದೆ.[6] ಈಗಿನ ಲಿಂಗನಮಕ್ಕಿ ಪ್ರದೇಶದಲ್ಲಿ, ಒಂದು ಚಿಕ್ಕ ನಾಡು ಇತ್ತು. ಅದನ್ನು ಬಿದನೂರು ನಾಡು ಎನ್ನುತ್ತಿದ್ದರು. ಬಿದನೂರು ಅದರ ರಾಜಧಾನಿ. ಸೇಗಣಿ ಬೊಮ್ಮನಾಯಕ ಅರಸನಾಗಿದ್ದಾಗ, ಬೊಮ್ಮರಸ ಅವನ ಮೇಲೆ ದಂಡೆತ್ತಿ ಹೋಗಿ 'ಮಳಲಿ' ಎಂಬ ಗ್ರಾಮವನ್ನು ಸುಟ್ಟು ಹಾಕುತ್ತಾನೆ. ಸೇಗಣಿ ಬೊಮ್ಮನಾಯಕನಿಗೂ, ಬೊಮ್ಮರಸನಿಗೂ ಯುದ್ಧವಾಗಿ, ಸೇಗಣಿ ಬೊಮ್ಮನಾಯಕ ಸತ್ತು ಹೋಗುತ್ತಾನೆ. ಈ ವಿವರ ನಮಗೆ ಕ್ರಿ.ಶ. ೧೨೬೫ರ ಶಾಸನದಿಂದ ದೊರೆಯುತ್ತದೆ.[7] ಪಟಗುಪ್ಪೆಯ ಮಾಂಡಲಿಕನಾದ ಚೋಕರಸನು, ಬೊಮ್ಮರಸನಿಗೆ ಸೇರಿದ್ದ ಹನಿಯ ಎಂಬ ಕೋಟೆಯನ್ನು ಮುತ್ತುತ್ತಾನೆ. ಬೊಮ್ಮರಸನಿಗೂ, ಚೋಕರಸನಿಗೂ ಭಯಂಕರ ಯುದ್ಧ ನಡೆದು ಬೊಮ್ಮರಸ ಸತ್ತು ಹೋಗುತ್ತಾನೆ.

2 ಅದೇ : ಸಾಗರ ೬೭
3 ಅದೇ : ಸಾಗರ ೩೮
4 ಅದೇ : ಸಾಗರ ೧೨೭
5 ಅದೇ : ಸಾಗರ ೧೪೦
6 ಅದೇ : ಸಾಗರ ೧೩೪
7 ಅದೇ : ಸಾಗರ ೭೮

ಇದನ್ನು ಕ್ರಿ.ಶ. ೧೨೬೬ರ ಶಾಸನ ನಮಗೆ ತಿಳಿಸುತ್ತದೆ.[8]

೨. **ಬೀರರಸ :** ಬೀರರಸ ಬೊಮ್ಮರಸನ ಮೊದಲ ಮಗ. ಇವನಿಗೆ ಕಾಳರಸ ಎಂಬ ಹೆಸರೂ ಇತ್ತು. ಇವನು ಹೊಸಗುಂದದ ಅರಸನಾಗಿದ್ದನೆಂಬುದನ್ನು ಕ್ರಿ.ಶ. ೧೧೬೫ರ ಶಾಸನ ತಿಳಿಸುತ್ತದೆ.[9] ಕ್ರಿ.ಶ. ೧೨೭೮ರ ಶಾಸನ,[10] ಕ್ರಿ.ಶ. ೧೨೪೦ರ ಶಾಸನ.[11] ಕ್ರಿ.ಶ. ೧೨೩೮ರ ಶಾಸನ[12]—ಇವು ಬೊಮ್ಮರಸನನಂತರ ಬೀರರಸನು ಹೊಸಗುಂದದ ನಾಡನ್ನು ಆಳುತ್ತಿದ್ದನೆಂಬುದನ್ನು ವರ್ಣಿಸುತ್ತವೆ. ಬೀರರಸನು ಕೆಲವು ಕಾಲ ಹೊಂಬುಚ ನಾಡನ್ನು ಆಳುತ್ತಿದ್ದನೆಂದೂ, ಆಗ ಇವನ ತಮ್ಮನಾದ ತಮ್ಮರಸನು ಹೊಸಗುಂದದ ನಾಡನ್ನು ಆಳುತ್ತಿದ್ದನೆಂದೂ ಕ್ರಿ.ಶ. ೧೨೨೦ರ ಶಾಸನ ಹೇಳುತ್ತದೆ.[13] ಪ್ರಾಯಶಃ ಅಣ್ಣ ತಮ್ಮಂದಿರಲ್ಲಿ ವಿರಸ ಬಂದಿರಬಹುದು. ಇದರ ಪರಿಣಾಮವಾಗಿ, ಬೀರರಸ, ತಾನು ಹೊಂಬುಚ ನಾಡಿನ ಅಧಿಕಾರವನ್ನು ವಹಿಸಿಕೊಂಡ ಆರನೆಯ ವರ್ಷ, ಹೊಸಗುಂಡದ ಮೇಲೆ ದಂಡೆತ್ತಿ ಹೋಗಿದ್ದನೆಂದು ಕ್ರಿ.ಶ. ೧೨೭೧ರ ಶಾಸನ ವರ್ಣಿಸುತ್ತದೆ.[14] ಬೀರರಸನು ತನ್ನ ಪಟ್ಟಾಭಿಷೇಕವಾದ ನಲವತ್ತೇಳನೆಯ ವರ್ಷದಲ್ಲಿ ಬಿದನೂರು ರಾಜ್ಯದ ಮೇಲೆ ದಂಡೆತ್ತಿ ಹೋದನೆಂದು, ಕ್ರಿ.ಶ. ೧೨೫೪ರ ಶಾಸನ ವಿವರಿಸುತ್ತದೆ.[15] ಇವನು ಮರಣ ಹೊಂದಿದ ವಿಷಯವನ್ನು ಕ್ರಿ.ಶ. ೧೨೫೬ರ ಶಾಸನ ತಿಳಿಸುತ್ತದೆ.[16]

೩. **ತಮ್ಮರಸ :** ತಮ್ಮರಸ ಬೊಮ್ಮರಸನ ಎರಡನೆಯ ಮಗ; ಬೀರರಸನ ತಮ್ಮ. ಇವನಿಗೆ ಬಾಳಿಯಮ್ಮ ಹೆಗ್ಗಡೆ ಎಂಬ ಹೆಸರೂ ಇತ್ತು. ಕ್ರಿ.ಶ. ೧೨೨೦ರ ಶಾಸನ, ತಮ್ಮರಸ ಹೊಸಗುಂದ ನಾಡಿನ ಅರಸನಾಗಿದ್ದನೆಂದು ಹೇಳುತ್ತದೆ.[17]

ಬೀರರಸನ ಕಾಲದಲ್ಲಿ, ಇವನ ಅಧೀನದಲ್ಲಿದ್ದ ಐವತ್ತು ನಾಡುಗಳು ಕೈತಪ್ಪಿ ಪಟುಗುಪ್ಪೆಯ ಬೆಲ್ಲರಸನ ವಶದಲ್ಲಿದ್ದುವು. ತಮ್ಮರಸನು ಅವನ್ನು ವಶಮಾಡಿಕೊಳ್ಳುವ ಉದ್ದೇಶದಿಂದ, ಪಟುಗುಪ್ಪೆಯನ್ನು ಮುತ್ತಿದನು. ಈ ಯುದ್ಧದಲ್ಲಿ ಬೆಲ್ಲರಸನ ಮಗ ತೈಲರಸನು ಸಾಯುತ್ತಾನೆ. ಬೆಲ್ಲರಸನು ವೀರಾವೇಶದಿಂದ ಹೋರಾಡಿ, ತಮ್ಮರಸನನ್ನು ಹಿಂದಕ್ಕೆ ಅಟ್ಟುತ್ತಾನೆ. ಅಷ್ಟೇ ಅಲ್ಲ ರಾಜಧಾನಿಯಾದ ಹೊಸಗುಂದದವರೆಗೂ ಬಂದು, ಅದನ್ನು ಲೂಟಿ ಮಾಡಿ, ತಮ್ಮರಸನ ಮಕ್ಕಳನ್ನೆಲ್ಲಾ ಕೊಂದು ಹಾಕುತ್ತಾನೆ. ಪ್ರಾಯಶಃ ತಮ್ಮರಸನೂ ಈ ಯುದ್ಧದಲ್ಲಿ ಕೊಲ್ಲಲ್ಪಟ್ಟಿದ್ದಾನೆ. ಅನಂತರ ಮಂತ್ರಿಗಳು ಉಳಿದ ಪರಿವಾರದೊಂದಿಗೆ ಹೊಂಬುಚಕ್ಕೆ ಬಂದು ನೆಲೆಸುತ್ತಾರೆ. ಈ ವಿವರವನ್ನು ಕ್ರಿ.ಶ. ೧೨೬೬ರ ಶಾಸನ ತಿಳಿಸುತ್ತದೆ.[18]

೪. **ಕೋಟಿ ನಾಯಕ :** ಕೋಟಿ ನಾಯಕ ಬೊಮ್ಮರಸನ ಕಾಲದಿಂದಲೂ ಹೊಸಗುಂದದ ಮಂತ್ರಿ

---

8 ಅದೇ : ನಗರ ೨೦

9 ಅದೇ : ಸಾಗರ ೧೧೩

10 ಅದೇ : ಸಾಗರ ೧೪೬

11 ಅದೇ : ಸಾಗರ ೧೬೦

12 ಅದೇ : ನಗರ ೧೦

13 ಅದೇ : ನಗರ ೩೦

14 ಅದೇ : ನಗರ ೮

15 ಅದೇ : ಸಾಗರ ೧೫೦

16 ಅದೇ : ನಗರ ೬

17 ಅದೇ : ನಗರ ೩೦

18 ಅದೇ : ನಗರ ೨೦

ಯಾಗಿದ್ದನು. ಇವನು ಹೊಂಬುಚ ನಾಡನ್ನು ಆಳಿದ ನೆಂದೂ, ಆಗ ಬಂಕ ನಾಯಕ ಎಂಬುವನ ಮೇಲೆ ಧಾಳಿ ಮಾಡಿದನೆಂದೂ, ಕ್ರಿ.ಶ. ೧೨೯೦ರ ಶಾಸನ ತಿಳಿಸುತ್ತದೆ.[19]

ಇವನ ನಂತರ ಹೊಸಗುಂದ ನಾಡಿನ ಬಗ್ಗೆ ಆದರ ಅರಸರ ಬಗ್ಗೆ ಏನೂ ತಿಳಿದು ಬರುವುದಿಲ್ಲ.

ಹೊಸಗುಂದ ನಾಡಿನ ಅರಸರ ಕಾಲದ ಸಾಹಿತ್ಯ, ಕಲೆ–ಮುಂತಾದುವುಗಳ ಬಗ್ಗೆ ಸಂಶೋಧನೆ ನಡೆಯ ಬೇಕಾಗಿದೆ. ○

---

13 ಅದೇ : ನಗರ ೩೩೦